# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 81
ಉತ್ತರಿಸಬೇಕಾದ ದಿನಾಂಕ : 17.09.2021.
ಸದಸ್ಯರ ಹೆಸರು : ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ. (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)
ಉತ್ತರಿಸುವ ಸಚಿವರು : ಮಾನ್ಯ ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರ.ಸ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆ ಸೋಮವಾರಪೇಟೆಯಲ್ಲಿ ಸಿಂಥೆಟಿಕ್ ಹಾಕಿ ಟರ್ಫ್ ಕಾಮಗಾರಿಯನ್ನು ಕಳೆದ ಏಳು ವರ್ಷಗಳಿಂದ ನಡೆಸುತ್ತಿದ್ದರೂ ಸಹ, ಇನ್ನೂ ಅದರ ಕಾಮಗಾರಿ ಪೂರ್ಣಗೊಳ್ಳದಿರಲು ಕಾರಣಗಳೇನು; ಇದನ್ನು ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು; (ವಿವರ ಒದಗಿಸುವುದು) | ಕೊಡಗು ಜಿಲ್ಲೆ ಸೋಮವಾರಪೇಟೆ ಜೂನಿಯರ್ ಕಾಲೇಜು ಮೈದಾನದಲ್ಲಿ ಸಿಂಥೆಟಿಕ್ ಹಾಕಿ ಟರ್ಫ್ ಅಳವಡಿಸುವ ಕಾಮಗಾರಿಯನ್ನು ರೂ 4,02,06,300/-ಗಳ ವೆಚ್ಚದಲ್ಲಿ ಕೈಗೊಳ್ಳಲು ಮೇ\|\| ಗ್ರೇಟ್ ಸ್ಪೋರ್ಟ್ಸ್ ಟೆಕ್, ಹೈದ್ರಾಬಾದ್ ಇವರಿಗೆ **ದಿನಾಂಕ: 06.06.2019ರಂದು** ಕಾರ್ಯಾದೇಶ ಪತ್ರ ನೀಡಲಾಗಿರುತ್ತದೆ. ಗುತ್ತಿಗೆದಾರರಿಗೆ ಇದುವರೆಗೆ ರೂ 304.19 ಲಕ್ಷ ಮಾತ್ರ ಪಾವತಿಸಲಾಗಿದೆ. ನಿಗಧಿಪಡಿಸಿದ ಎಲ್ಲಾ ಕಾಮಗಾರಿಗಳನ್ನು ಉತ್ತಮ ಗುಣಮಟ್ಟದೊಂದಿಗೆ ಸಂಪೂರ್ಣವಾಗಿ ಪೂರ್ಣಗೊಳಿಸಿದ ನಂತರ ನಿಯಮಾನುಸಾರ ಬಾಕಿ ಮೊತ್ತ ಪಾವತಿಸಲಾಗುವುದು.<br><br>ಈ ಕಾಮಗಾರಿಯನ್ನು ಪ್ರಾರಂಭಿಸಿ, ಹಾಕಿ ಟರ್ಫ್ ಅಳವಡಿಸುವ ವರೆಗೂ ಕನಿಷ್ಟ ಉಷ್ಣತೆಯನ್ನು ಕಾಪಾಡುವುದು ಅವಶ್ಯವಾಗಿರುತ್ತದೆ. ಆದರೆ ಮಳೆ ಕಾರಣದಿಂದ, ಮಳೆಗಾಲ ಮುಗಿಯುವ ತನಕ ಕಾಮಗಾರಿಯನ್ನು ಪ್ರಾರಂಭಿಸಲು ಸಾಧ್ಯವಾಗಿರುವುದಿಲ್ಲ.<br><br>ತದನಂತರ ಮಹಾಮಾರಿ ಕೋವಿಡ್-19ರ ಹಿನ್ನೆಲೆಯಲ್ಲಿ ರಾಜ್ಯಾದ್ಯಂತ ಜಾರಿಯಲ್ಲಿದ್ದ ಎರಡು ಲಾಕ್ ಡೌನ್ ಯಿಂದ ಕಾಮಗಾರಿಯ ಪ್ರಗತಿಯು ಕುಂಠಿತಗೊಂಡಿರುತ್ತದೆ.<br><br>ಪ್ರಸ್ತುತ ಹಾಕಿ ಕ್ರೀಡಾಂಗಣದಲ್ಲಿ ಟರ್ಫ್ ಅಳವಡಿಕೆ ಸ್ಥಳದಲ್ಲಿ ತಳಪಾಯ ಕಾಮಗಾರಿ ಪೂರ್ಣಗೊಳಿಸಿ, ಸಿಂಥೆಟಿಕ್ ಟರ್ಫ್ ಅಳವಡಿಸುವ ಕಾಮಗಾರಿಯು ಪೂರ್ಣಗೊಂಡಿರುತ್ತದೆ. ಹಾಕಿ ಟರ್ಫ್ ಅಂಕಣ ಸುತ್ತಲೂ ಇಂಟರ್‌ಲಾಕ್ ಅಳವಡಿಸುವುದು, ಸಂಪ್ ಟ್ಯಾಂಕ್ |

| | | |
|---|---|---|
| | | ನಿರ್ಮಾಣ ಮತ್ತಿತರ ಪೂರಕ ಸಿವಿಲ್ ಕಾಮಗಾರಿಗಳು ಪೂರ್ಣಗೊಳ್ಳಬೇಕಿದ್ದು, ಕಾಮಗಾರಿ ಪ್ರಗತಿಯಲ್ಲಿದ್ದು, ಶೀಘ್ರದಲ್ಲಿ ಪೂರ್ಣಗೊಳ್ಳುವುದು. |
| ಆ) | ಈ ಸಿಂಥೆಟಿಕ್ ಹಾಕಿ ಟರ್ಫ್ ಕಾಮಗಾರಿಯು ಕಳಪೆ ಮಟ್ಟದಿಂದ ಕೂಡಿರುವುದಾಗಿ ಸ್ಥಳೀಯರು ಆರೋಪಿಸಿದ್ದು, ಇದು ಪತ್ರಿಕೆಗಳಲ್ಲಿ ಪ್ರಕಟವಾಗಿದ್ದು, ಇದರ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; (ಮಾಹಿತಿ ಒದಗಿಸುವುದು) | ಹಾಕಿ ಗೋಲ್ಸ್ ಸ್ಪೀಡ್ ಎಲ್-13-31ಐಎಸ್ 15 ಮಾದರಿಯ ಹಾಕಿ ಟರ್ಫ್‌ನ್ನು ಸೋಮವಾರಪೇಟೆ ಹಾಕಿ ಕ್ರೀಡಾಂಗಣದಲ್ಲಿ ಅಳವಡಿಸಲಾಗಿದ್ದು, ಇದು ಅಂತಾರಾಷ್ಟ್ರೀಯ ಹಾಕಿ ಫೆಡರೇಷನ್ (ಎಫ್.ಐ.ಹೆಚ್.) ಮಾನ್ಯತೆ ಪಡೆದ ಅಂತಾರಾಷ್ಟ್ರೀಯ ಗುಣಮಟ್ಟದ ಹಾಕಿ ಟರ್ಫ್ ಆಗಿರುತ್ತದೆ. ಹಾಕಿ ಟರ್ಫ್ ಕಳಪೆ ಗುಣಮಟ್ಟದ್ದಾಗಿರುವ ಕುರಿತು ಆರೋಪವು ನಿರಾಧಾರವಾಗಿದೆ. |
| ಇ) | ಈ ಕಾಮಗಾರಿಯು ಪೂರ್ಣವಾಗದೆ, ಪರಿಶೀಲನೆ ನಡೆಸಿ ಯೋಗ್ಯತೆ ಪತ್ರವನ್ನು ನೀಡಲಾಗಿದ್ದು, ಇದರ ಬಗ್ಗೆ ಸರ್ಕಾರದ ಕ್ರಮಗಳೇನು ಹಾಗೂ ಈ ಯೋಗ್ಯತೆ ಪತ್ರವನ್ನು ನೀಡಿದ ಅಧಿಕಾರಿಗಳ ಮೇಲೆ ತೆಗೆದುಕೊಂಡ ಕಠಿಣ ಕ್ರಮಗಳೇನು? (ವಿವರ ಒದಗಿಸುವುದು) | ಹಾಕಿ ಟರ್ಫ್ ಅಳವಡಿಸಲಾದ ಹಾಕಿ ಅಂಕಣಗಳನ್ನು ಅಂತಾರಾಷ್ಟ್ರೀಯ ಹಾಕಿ ಫೆಡರೇಷನ್ ಪರಿಶೀಲಿಸಿ, ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಕ್ರೀಡಾಕೂಟಗಳನ್ನು ಆಯೋಜಿಸಲು ಅಗತ್ಯ ಗುಣಮಟ್ಟ ಹೊಂದಿರುವ ಬಗ್ಗೆ ದೃಢೀಕರಿಸಿ, ತನ್ನ ವೆಬ್‌ಸೈಟ್‌ನಲ್ಲಿ ಪ್ರಕಟಿಸುತ್ತದೆ. ಸೋಮವಾರಪೇಟೆ ಹಾಕಿ ಅಂಕಣದಲ್ಲಿ ಹಾಕಿ ಟರ್ಫ್ ಬೇಸ್ ಮತ್ತು ಟರ್ಫ್ ಅಳವಡಿಸುವ ಕಾರ್ಯ ಪೂರ್ಣಗೊಂಡಿದ್ದು, ಅಂತಾರಾಷ್ಟ್ರೀಯ ಹಾಕಿ ಫೆಡರೇಷನ್ ಸದರಿ ಹಾಕಿ ಅಂಕಣವು ತನ್ನ ಗುಣಮಟ್ಟದ ನಿಬಂಧನೆಗಳಿಗೆ ಅನುಗುಣವಾಗಿರುವುದಾಗಿ ದೃಢೀಕರಿಸಿರುತ್ತದೆ. ಅಂತಾರಾಷ್ಟ್ರೀಯ ಹಾಕಿ ಫೆಡರೇಷನ್ ಹಾಕಿ ಕ್ರೀಡೆಗೆ ಸಂಬಂಧಿಸಿದಂತೆ ವಿಶ್ವದ ಅತ್ಯುನ್ನತ ಸಂಸ್ಥೆಯಾಗಿದ್ದು, ಒಂದು ಸ್ವಾಯತ್ತ ಸಂಸ್ಥೆಯಾಗಿರುತ್ತದೆ. ಸದರಿ ಸಂಸ್ಥೆಯು ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವುದಿಲ್ಲ. |

**ವೈಎಸ್‌ಡಿ/ಇಬಿಬಿ/134/2021**

**(ಡಾ. ನಾರಾಯಣಗೌಡ)**
ರೇಷ್ಮೆ, ಯುವ ಸಬಲೀಕರಣ ಮತ್ತು
ಕ್ರೀಡಾ ಸಚಿವರು.